## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಸದಸ್ಯರ ಹೆಸರು | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 222 (254) |
| ಉತ್ತರಿಸಬೇಕಾದ ದಿನಾಂಕ | 14.09.2021 |
| ಉತ್ತರಿಸುವವರು | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ನಗರದಲ್ಲಿ ಒಳಚರಂಡಿ ಮತ್ತು ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸುವ ಕಾರ್ಯಕ್ಕೆ ಕೈಗೆತ್ತಿಕೊಂಡಿರುವ ಕಾಮಗಾರಿಗಳು ಯಾವುವು; (ಸ್ಪಷ್ಟ ವಿವರ ಒದಗಿಸುವುದು) | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಬೀದರ್ ನಗರದಲ್ಲಿ ಕೈಗೊಂಡಿರುವ ಒಳರಂಡಿ ಮತ್ತು ಕುಡಿಯುವ ನೀರು ಯೋಜನೆಯ ವಿವರಗಳು ಈ ಕೆಳಕಂಡತಿದೆ.<br>**<u>ಅ. ಒಳಚರಂಡಿ ಯೋಜನೆ ವ್ಯವಸ್ಥೆ</u>**<br>ಬೀದರ್ ನಗರದಲ್ಲಿ ಒಳಚರಂಡಿ ವ್ಯವಸ್ಥೆ ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ವಲಯ-2, ವಲಯ-3 ಮತ್ತು ವಲಯ-1 & 3 ರ ಬಿಟ್ಟು ಹೋದ ಪ್ರದೇಶಗಳಲ್ಲಿ ಒಳಚರಂಡಿ ಕಾಮಗಾರಿಯನ್ನು ಒಟ್ಟಾರೆ ರೂ.216.37 ಕೋಟಿಗಳಿಗೆ ಕೈಗೆತ್ತಿಕೊಳ್ಳಲಾಗಿದೆ. ವಿವರಗಳು ಈ ಕೆಳಕಂಡಂತಿದೆ.<br><br>**1) ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-2 ಕ್ಕೆ ಒಳಚರಂಡಿ ಯೋಜನೆಯ ಅಂದಾಜು ಮೊತ್ತ ರೂ.129.41 ಕೋಟಿಗಳು:-**<br>1. 133.00 ಕಿ.ಮೀ. ಒಳಚರಂಡಿ ಕೊಳವೆ ಮಾರ್ಗ ಅಳವಡಿಸಲಾಗಿದೆ,<br>2. 12109 ಸಂಖ್ಯೆ ಗೃಹ ಸಂಪರ್ಕ ಜೋಡಣೆಗಳನ್ನು ಕಲ್ಪಿಸಲಾಗಿದೆ<br>3. ಅಮಲಾಪೂರ್ ನಾಲಾ ದಲ್ಲಿ ಒಂದು ಸಂಖ್ಯೆ ವೆಟ್‌ವೆಲ್ ಮತ್ತು ನ್ಯೂ ಆದರ್ಶ ಕಾಲೋನಿಯಲ್ಲಿ ಒಂದು ಸಂಖ್ಯೆ ವೆಟ್‌ವೆಲ್ ನಿರ್ಮಿಸಲಾಗಿದೆ.<br>4. ಗೋರನಳ್ಳಿ(ಬಿ) ಗ್ರಾಮದ ವ್ಯಾಪ್ತಿಯಲ್ಲಿ 17.26 ಎಂ.ಎಲ್.ಡಿ. ಸಾಮರ್ಥ್ಯದ ಮಲೀನ ನೀರು ಸಂಸ್ಕರಣಾ ಘಟಕ (SBR type) ನಿರ್ಮಿಸಲಾಗಿದೆ.<br>5. ಸದರಿ ಕಾಮಗಾರಿಯು ಡಿಸೆಂಬರ್ 2019 ರಲ್ಲಿ ಮುಕ್ತಾಯಗೊಳಿಸಿ ಚಾಲನೆಗೊಳಿಸಲಾಗಿದೆ. |

| | | |
|---|---|---|
| | | **2) ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-3 ಕ್ಕೆ ಒಳಚರಂಡಿ ಯೋಜನೆ (ಹೆಚ್ಚುವರಿ ಅನುದಾನದಡಿ) ಅಂದಾಜು ಮೊತ್ತ ರೂ.69.26 ಕೋಟಿಗಳು:-**<br>1. 67.07 ಕಿ.ಮೀ. ಒಳಚರಂಡಿ ಕೊಳವೆ ಮಾರ್ಗ ಅಳವಡಿಸುವುದು,<br>2. 8025 ಸಂಖ್ಯೆ ಗೃಹ ಸಂಪರ್ಕ ಜೋಡಣೆಗಳನ್ನು ಕಲ್ಪಿಸುವುದು ಹಾಗೂ<br>3. ಒಂದು ಸಂಖ್ಯೆ ವೆಟ್‌ವೆಲ್ ಮತ್ತು ನೌಬಾದ ಗ್ರಾಮದ ವ್ಯಾಪ್ತಿಯಲ್ಲಿ 7.00 ಎಂ.ಎಲ್.ಡಿ. ಸಾಮರ್ಥ್ಯದ ಮಲೀನ ನೀರು ಸಂಸ್ಕರಣಾ ಘಟಕ (SBR type) ನಿರ್ಮಿಸುವುದು.<br><br>**3) ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-3 & 1 ರ ಬಿಟ್ಟು ಹೋದ ಪ್ರದೇಶಗಳಲ್ಲಿ ಒಳಚರಂಡಿ ಯೋಜನೆ(ಉಳಿತಾಯ ಮೊತ್ತದಲ್ಲಿ) ಅಂದಾಜು ಮೊತ್ತ ರೂ.17.70 ಕೋಟಿಗಳು:-**<br>1. 38.91 ಕಿ.ಮೀ. ಒಳಚರಂಡಿ ಕೊಳವೆ ಮಾರ್ಗ ಅಳವಡಿಸುವುದು,<br>2. 2300 ಸಂಖ್ಯೆ ಗೃಹ ಸಂಪರ್ಕ ಜೋಡಣೆಗಳನ್ನು ಕಲ್ಪಿಸುವುದು.<br><br>**ಆ. ನೀರು ಸರಬರಾಜು ವ್ಯವಸ್ಥೆ :-**<br>ಬೀದರ್ ನಗರದಲ್ಲಿ ನೀರು ಸರಬರಾಜು ವ್ಯವಸ್ಥೆ ಕಲ್ಪಿಸಲು ರೂ.24.90 ಕೋಟಿಗಳ ಅಂದಾಜು ಮೊತ್ತದಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ನಗರದ 5 ವಲಯ (ವಲಯ 1, 2, 3 ಮತ್ತು 7, 8) ಗಳಲ್ಲಿ ಸುಮಾರು 90.00 ಕಿ.ಮೀ. ವಿತರಣಾ ಜಾಲ ಮತ್ತು 1700 (ವಲಯ 1,2,3 ರಲ್ಲಿ) ಗೃಹ ಸಂಪರ್ಕಗಳನ್ನು ಅಳವಡಿಸುವ ಕಾಮಗಾರಿಯನ್ನು ಕೈಗೊಂಡು ಪೂರ್ಣಗೊಳಿಸಿ 2017 ರಲ್ಲಿ ನಗರಸಭೆ ಬೀದರ ರವರಿಗೆ ಹಸ್ತಾಂತರಿಸಲಾಗಿರುತ್ತದೆ. |
| ಆ) | ಒಳಚರಂಡಿ ನಿರ್ಮಾಣ ಹಂತ 1ರ ಕಾಮಗಾರಿ ಯಾವ ಹಂತದಲ್ಲಿದೆ; ಪೂರ್ಣಗೊಂಡಿರುವ ಕಡೆಗಳಲ್ಲಿ ಸಾರ್ವಜನಿಕರಿಗೆ ಸರಿಯಾಗಿ ಉಪಯೋಗಕ್ಕೆ ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ | ಎನ್‌ಕೆಯುಎಸ್‌ಐಪಿ (NKUSIP) ಯೋಜನೆಯಡಿ ಒಳಚರಂಡಿ ಕಾಮಗಾರಿ ಬೀದರ್ ನಗರ ಪ್ರದೇಶದ ಶೇ.33% ಕ್ಷೇತ್ರದ ವ್ಯಾಪ್ತಿಯಲ್ಲಿ ಒಳಚರಂಡಿ ಕಾಮಗಾರಿ ಗುತ್ತಿಗೆ ಕರಾರಿನಂತೆ ಕೈಗೊಳ್ಳಲಾಗಿದ್ದು, ಕಾಮಗಾರಿ ಪೂರ್ಣಗೊಂಡಿರುತ್ತದೆ. ಆದರೆ, ಈ ಯೋಜನೆಯಡಿ ಪ್ರತಿ ಮನೆಗೆ ಒಳಚರಂಡಿ ಗೃಹ ಸಂಪರ್ಕ ನೀಡಲು ಅವಕಾಶ ವಿರುವುದಿಲ್ಲ. ಇದನ್ನು ಸಂಬಂಧಪಟ್ಟ ಬಳಕೆದಾರರು ಅವರ ವೆಚ್ಚದಲ್ಲಿ ಮಾಡಿಕೊಳ್ಳಬೇಕಾಗಿರುತ್ತದೆ. |

| | | |
|---|---|---|
| | ಬಂದಿದೆಯೇ; ಬಂದಿದ್ದಲ್ಲಿ, ಈ ಯೋಜನೆ ವಿಫಲವಾಗಲು ಕಾರಣಗಳೇನು; (ಮಾಹಿತಿ ನೀಡುವುದು) | ನಗರದಲ್ಲಿ ಅಳವಡಿಸಿರುವ ಕೊಳವೆಗೆ ಸೀಮಿತವಾಗಿ ಗೃಹ ಸಂಪರ್ಕಗಳನ್ನು 12198 ನೀಡಬಹುದಾಗಿದ್ದು, ಇವುಗಳ ಪೈಕಿ 3450 ಮನೆಗಳಿಗೆ ಮಾತ್ರ ಬಳಕೆದಾರರು ತಮ್ಮ ಖರ್ಚಿನಲ್ಲಿ ಪಡೆದುಕೊಂಡಿರುತ್ತಾರೆ. ಉಳಿದ ಗೃಹ ಸಂಪರ್ಕಗಳನ್ನು ಬಳಕೆದಾರರಿಗೆ ಮನವೊಲಿಸಿ ಸಂಪೂರ್ಣಗೊಳಿಸಲು ನಗರ ಸಭೆಯಿಂಧ ಕ್ರಮವಹಿಸಲಾಗಿದೆ. ಸಮಾನಂತರವಾಗಿ ಅಮೃತ್ ಯೋಜನೆಯಡಿಯಲ್ಲಿ ನಗರದ ಉಳಿದ ಭಾಗದಲ್ಲಿ ಒಳಚರಂಡಿ ಕೊಳವೆ ಹಾಗೂ ಮನೆ ಸಂಪರ್ಕ ಕೆಯುಡಬ್ಲ್ಯೂಎಸ್‌ಡಿಬಿ ವತಿಯಿಂದ ಅಳವಡಿಸಲಾಗುತ್ತಿದೆ. ಇದುವರೆಗೆ ನಗರದ ಒಟ್ಟು ಆಸ್ತಿಗಳ ಪೈಕಿ ಸುಮಾರು ಶೇ.10% ಗೃಹ ಸಂಪರ್ಕ ಆಗಿರುತ್ತದೆ. ಇದರ ತ್ಯಾಜ್ಯ ನೀರು ಒಳಚರಂಡಿ ಕೊಳವೆ ಜಾಲದ ಮೂಲಕ ಹರಿದು ಎಸ್.ಟಿ.ಪಿ ಘಟಕಕ್ಕೆ ಸೇರುತ್ತಿದೆ. ಸದ್ಯಕ್ಕೆ ಸುಮಾರು 3 ಎಂಎಲ್‌ಡಿ ತ್ಯಾಜ್ಯ ನೀರು ಹರಿದು ಬರುತ್ತಿದೆ. ಇದರಿಂದ ಒಳಚರಂಡಿ ಕೊಳವೆ ಜಾಲವು ಕಾರ್ಯ ನಿರ್ವಹಿಸುತ್ತಿರುವುದು ದೃಡಪಟ್ಟಿರುತ್ತದೆ. ತ್ಯಾಜ್ಯ ನೀರು ಒಳಹರಿವು ಬಹಳ ಅಲ್ಪ (ವಿನ್ಯಾಸದಂತೆ 17 ಎಂಎಲ್‌ಡಿ) ಪ್ರಮಾಣವಾಗಿರುತ್ತದೆ. ಇದರಿಂದ ಎಸ್‌ಟಿಪಿ ಘಟಕವು ಪೂರ್ಣ ಪ್ರಮಾಣದಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಆದುದರಿಂದ, ನಗರಸಭೆ ವತಿಯಿಂದ ಬಳಕೆದಾರರ ಮನವೊಲಿಸಿ ತ್ವರಿತವಾಗಿ ಒಳಚರಂಡಿ ಮನೆ ಸಂಪರ್ಕವನ್ನು ನೀಡಲು ಕ್ರಮ ಕೈಗೊಳ್ಳಬೇಕಾಗಿದೆ.<br>ಒಳಚರಂಡಿ ಜಾಲ ಹಾಗೂ ಎಸ್‌ಟಿಪಿ ಘಟಕವು ಲಭ್ಯವಿರುವ ಜಲ ತ್ಯಾಜ್ಯ ಉಪಯೋಗಿಸಿಕೊಂಡು ಚಾಲನೆಯಲ್ಲಿರುತ್ತದೆ. ಆದುದರಿಂದ, ಯೋಜನೆಯು ವಿಫಲತೆ ಕಂಡುಬಂದಿರುವುದಿಲ್ಲ. ಪೂರ್ಣ ಪ್ರಮಾಣದಲ್ಲಿ ಗೃಹ ಸಂಪರ್ಕಗಳನ್ನು ಬಳಕೆದಾರರು ಪಡೆದ ನಂತರ ಪೂರ್ಣ ಪ್ರಮಾಣದಲ್ಲಿ ಕಾರ್ಯ ನಿರ್ವಹಿಸುತ್ತದೆ. ಆದುದರಿಂದ, ಯೋಜನೆಯು ವಿಫಲವಾಗಿರುವುದಿಲ್ಲ. |
| ಇ). | ಅಮೃತ್ ಯೋಜನೆ ಅಡಿಯಲ್ಲಿ 3ರ ಹಂತಗಳಲ್ಲಿನ ಕಾಮಗಾರಿಗಳು ಕೈಗೆತ್ತಿಕೊಂಡ ಕಾಮಗಾರಿಗಳ ಪೂರ್ಣಗೊಂಡಿದೆಯೇ; ಕಾಮಗಾರಿ ಪೂರ್ಣಗೊಂಡಿದ್ದಲ್ಲಿ, | ಹಂತ-3 ರಲ್ಲಿ ವಲಯ-1 & 3 ರಲ್ಲಿ ಬಿಟ್ಟು ಹೋದ ಪ್ರದೇಶಗಳಲ್ಲಿ ಒಳಚರಂಡಿ ಕಾಮಗಾರಿಗಳು ಪ್ರಗತಿಯಲ್ಲಿವೆ. ಸದರಿ ಕಾಮಗಾರಿಗಳಿಗೆ ಇಲ್ಲಿಯವರೆಗೆ ತಗುಲಿದ ವೆಚ್ಚ ರೂ.4133.56 ಲಕ್ಷಗಳಾಗಿದ್ದು ಅಕ್ಟೋಬರ್ 2021 ರಲ್ಲಿ ಪೂರ್ಣಗೊಳಿಸಲು ಉದ್ದೇಶಿಸಲಾಗಿದೆ. |

| | | |
|---|---|---|
| | ಇದಕ್ಕೆ ತಗುಲಿದ ವೆಚ್ಚ ಎಷ್ಟು; ಈ ಕಾಮಗಾರಿಗಳ ನಿರ್ವಹಣೆ ಸರಿಯಾದ ರೀತಿಯಲ್ಲಿ ಆಗದಿರುವುದಕ್ಕೆ ಕಾರಣಗಳೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | |
| ಈ) | ನಗರಕ್ಕೆ ಸಮರ್ಪಕವಾಗಿ ಕುಡಿಯುವ ನೀರನ್ನು ಪೂರೈಕೆ ಮಾಡಲು ಎಷ್ಟು ಹಂತದ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; ಈ ಕಾಮಗಾರಿಗಳಿಗೆ ಎಷ್ಟು ವೆಚ್ಚ ಮಾಡಲಾಗಿದೆ; ಈ ಕಾಮಗಾರಿಗಳು ಯಾವ ಹಂತದಲ್ಲಿದೆ; (ಕಾಮಗಾರಿವಾರು ಸಂಪೂರ್ಣ ವಿವರ ನೀಡುವುದು) | ನಗರಕ್ಕೆ ಸಮರ್ಪಕವಾಗಿ ಕುಡಿಯುವ ನೀರನ್ನು ಪೂರೈಕೆ ಮಾಡಲು KUIDFC ವತಿಯಿಂದ 24/7 ನೀರು ಸರಬರಾಜು ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ.<br><br>ಕುಡಿಯುವ ನೀರು ಸರಬರಾಜು ವಿತರಣಾ ಜಾಲವನ್ನು ಅಳವಡಿಸಲು ಬೀದರ್ ನಗರವನ್ನು 19 ವಲಯಗಳನ್ನಾಗಿ ವಿಂಗಡಿಸಿ ಅವುಗಳಲ್ಲಿ 14 ವಲಯದ ವಿತರಣಾ ಜಾಲ ಮತ್ತು 16 ವಲಯಗಳಲ್ಲಿ ಗೃಹ ಸಂಪರ್ಕಗಳನ್ನು ಮಂಡಳಿ ವತಿಯಿಂದ ಕೈಗೊಳ್ಳಲಾಗಿರುತ್ತದೆ.<br><br>ಬಾಕಿ ಉಳಿದ 5 ವಲಯ (ವಲಯ 1,2,3 ಮತ್ತು 7,8)ಗಳಲ್ಲಿ ವಿತರಣಾ ಜಾಲ ಮತ್ತು ಗೃಹ ಸಂಪರ್ಕಗಳನ್ನು ಕಲ್ಪಿಸುವ ಕಾಮಗಾರಿಗಳನ್ನು (ವಲಯ 1,2 ಮತ್ತು 3) KUWS & DB ವತಿಯಿಂದ ಕೈಗೆತ್ತಿಕೊಳ್ಳಲಾಗಿದೆ.<br><br>KUWS & DB ವತಿಯಿಂದ ಕೈಗೊಂಡ ಕಾಮಗಾರಿಗಳು ಪೂರ್ಣಗೊಳಿಸಿ ಚಾಲನೆಗೊಲಿಸಿ 2017 ರಲ್ಲಿ ನಗರಸಭೆ ಬೀದರ ರವರಿಗೆ ಹಸ್ತಾಂತರಿಸಲಾಗಿದೆ. ಸದರಿ ಕಾಮಗಾರಿಗಾಗಿ ತಗುಲಿದ ವೆಚ್ಚ 2284.90 ಲಕ್ಷಗಳು. |
| ಉ) | ಈ ಯೋಜನೆ ಅಡಿಯಲ್ಲಿ ಪ್ರತಿ ದಿನ ಕುಡಿಯುವ ನೀರು ಲಭ್ಯವಾಗದಿರಲು ಕಾರಣಗಳೇನು; ಪ್ರತಿ ದಿನ ಕುಡಿಯುವ ನೀರು ಪೂರೈಕೆ ಮಾಡಲು ಕೈಗೊಂಡಿರುವ ಶಾಶ್ವತ ಕ್ರಮಗಳೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | ಬೀದರ ನಗರದ ನೀರು ಸರಬರಾಜು ವ್ಯವಸ್ಥೆಯನ್ನು ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ನಿರ್ವಹಿಸಲಾಗಿರುತ್ತದೆ. ಬೀದರ ನಗರಕ್ಕೆ ಸಗಟು ನೀರು ಸರಬರಾಜು 44 ಎಂಎಲ್‌ಡಿ ಅವಶ್ಯಕತೆ ಇರುತ್ತದೆ. ಮೊದಲೇ ಇದ್ದ ಮಾಂಜ್ರ ಜಲಾಶಯದಿಂದ ಬರುತ್ತಿದ್ದ 16 ಎಂಎಲ್‌ಡಿ ನೀರನ್ನು ಮುಂದುವರೆಸಲು ಪರಿಗಣಿಸಿ ಉಳಿದ ಬೇಡಿಕೆಗೆ ಅಂದರೆ ೨೮ ಎಂಎಲ್‌ಡಿ ನೀರನ್ನು ಕಾರಾಂಜ ಜಲಾಶಯ ಮೂಲದಿಂದ ನೀರನ್ನು ಪಂಪುಮಾಡಲು ಆಯೋಜಿಸಿ 2015 ರಲ್ಲಿ ಚಾಲನೆಗೊಳಿಸಲಾಯಿತು. 2014ನೇ ಸಾಲಿನಲ್ಲಿ ಮಾಂಜ್ರ ನದಿಯು ಬೇಸಿಗೆಯಲ್ಲಿ ಬತ್ತಿಹೋದ ಕಾರಣ ಈ ಮೂಲದ ನೀರು |

| | | |
|---|---|---|
| | | ಸರಬರಾಜನ್ನು ಕೆಯುಡಬ್ಲ್ಯೂಎಸ್&ಡಿಬಿ ರವರು ಸ್ಥಗಿತಗೊಳಿಸಿರುತ್ತಾರೆ. ಈಗ ಕಾರಾಂಜ ನದಿ ಮೂಲ ಒಂದರಿಂದಲೇ 28 ಎಂಎಲ್‌ಡಿ ಪಂಪ್ ಮಾಡಲು ಅವಕಾಶವಿದ್ದರೂ ವಿದ್ಯುತ್ ವ್ಯತ್ಯಯ ಹಾಗೂ ಇತರ ಕಾರಣಗಳಿಂದ 20 ರಿಂದ 21 ಎಂಎಲ್‌ಡಿ ನೀರನ್ನು ಬೀದರ ನಗರಕ್ಕೆ ಪಂಪ್ ಮಾಡಲಾಗುತ್ತಿದೆ. ಇದು ಶೇ.50 ಅವಶ್ಯಕತೆಗಿಂತ ಕಡಿಮೆ ಇರುತ್ತದೆ. ಇದರಿಂದ ಹೊಸ ಕೊಳವೆಯಿಂದ ನೀರು ಸರಬರಾಜು ಮಾಡಲಾಗುತ್ತಿಗೆ. ಆದ್ದರಿಂದ 24/7 ನೀರು ಪೂರೈಕೆಯಲ್ಲಿ ತೊಂದರೆಯಾಗಿದೆ. ಇದನ್ನು ಸರಿಪಡಿಸಲು ಹೆಚ್ಚುವರಿ ಪಂಪುಗಳನ್ನು (3 ಹಂತದಲ್ಲಿ) ಅಳವಡಿಸಿ ಹಾಗೂ ನಗರದ ಫೀಡರ್ ಲೈನ್ ಉನ್ನತೀಕರಿಸಲು ಸುಮಾರು ರೂ.20.00 ಕೋಟಿ ಅನುದಾನದ ಅವಶ್ಯಕತೆ ಇದೆ ಎಂದು ಅಂದಾಜು ಮಾಡಲಾಗಿದೆ. ಆದರೆ, ಇದರ ತಾಂತ್ರಿಕ ಸಧೃಡತೆ ಹಾಗೂ ವಿನ್ಯಾಸಗಳನ್ನು ಕೆಯುಐಡಿಎಫ್‌ಸಿಯ ತಾಂತ್ರಿಕ ಸಿಬ್ಬಂದಿಯಿಂದ ಪರಿಶೀಲಿಸಿದ ನಂತರ ಸರ್ಕಾರಕ್ಕೆ ಪ್ರಸ್ತಾವನಯನ್ನು ಸಲ್ಲಿಸಲಾಗುವುದೆಂದು ಪೌರಾಯುಕ್ತರು, ಪುರಸಭೆ ಬೀದರ ಇವರು ವರದಿ ಮಾಡಿರುತ್ತಾರೆ. |

**ಸಂಖ್ಯೆ: ನಅಇ 121 ಯುಎಂಎಸ್ 2021**

**(ಬಿ.ಎ.ಬಸವರಾಜ)**
**ನಗರಾಭಿವೃದ್ಧಿ ಸಚಿವರು**